ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ವಿವಿಧ ಉದ್ದಿಮೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

43 (58) ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ವಿವಿಧ ಉದ್ದಿಮೆಗಳಲ್ಲಿ ದುಡಿಯುತ್ತಿರುವ ಲಕ್ಷಾಂತರ ಕಾರ್ಮಿಕರಿಗೆ ರಾಜ್ಯ ಸರ್ಕಾರ ಕನಿಷ್ಠ ವೇತನ ಹೆಚ್ಚಳ ಮಾಡಿದೆಯೇ; ಮಾಡಿದ್ದಲ್ಲಿ ಶೇಕಡ ಎಷ್ಟು ಪ್ರತಿಶತ ಹೆಚ್ಚಿಸಲಾಗಿದೆ;

(ಆ) ಕಾರ್ಮಿಕರ ಕನಿಷ್ಠ ವೇತನವು ಎಷ್ಟು ಉದ್ದಿಮೆಗಳಿಗೆ ಅನ್ವಯವಾಗುತ್ತದೆ; ಇದನ್ನು ಪ್ರತಿ ಬಾರಿ ಶೇಕಡ ಎಷ್ಟು ಪ್ರತಿಶತ ಹೆಚ್ಚಿಸಲಾಗಿದೆ;

(ಇ) ಕನಿಷ್ಠ ವೇತನವನ್ನು ಹೆಚ್ಚಿಸಲು ಅನುಸರಿಸುವ ಮಾನದಂಡಗಳೇನು;

(ಈ) ಉದ್ಯಮಿಗಳಿಂದ ತೀವ್ರ ವಿರೋಧ ವ್ಯಕ್ತವಾಗಿದ್ದು ಕನಿಷ್ಠ ವೇತನ ಜಾರಿಗೊಳಿಸದಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು?